ಕೆ.ಬಿ. ಶಿವತಾರಕ್

# ತುಮಕೂರು ಜಿಲ್ಲೆಯಲ್ಲಿ ಇತ್ತೀಚೆಗೆ ದೊರೆತ ಕೆಲವು ಪ್ರಾಗೈತಿಹಾಸಿಕ ನೆಲೆಗಳು

ತುಮಕೂರು ಜಿಲ್ಲೆ ಕರ್ನಾಟಕದ ಕೆಲವೇ ಪ್ರದೇಶಗಳಂತೆ ಇತಿಹಾಸ ಪೂರ್ವ ಕಾಲದುದ್ದಕ್ಕೂ ಆದಿ ಮಾನವ ನಿವಾಸ ಸ್ಥಾನವಾಗಿತ್ತೆಂಬುದನ್ನು ಇಲ್ಲಿ ದೊರೆತಿರುವ ಹಲವಾರು ಅವಶೇಷಗಳಿಂದ ತಿಳಿಯ ಬಹುದಾಗಿದೆ. ಮಾನವನ ಮುನ್ನಡೆಗೆ ಇಲ್ಲಿನ ಪ್ರಾಕೃತಿಕ ಲಕ್ಷಣಗಳೂ ಸಹಾಯಕವಾಗಿ ಬಂದಿವೆ. ಪ್ರಾಗೈತಿಹಾಸಿಕ ಮಾನವನ ಜೀವನದ ಚಿತ್ರವನ್ನು ಪಡೆಯಲು ಇಲ್ಲಿ ದೊರಕುವ ಹಲವಾರು ಅವಶೇಷಗಳು ಸಹಕಾರಿಯಾಗಿವೆ.

ಈ ಜಿಲ್ಲೆಯ ಕೆಲವು ನೆಲೆಗಳಲ್ಲಿ ಪೂರ್ವ ಶಿಲಾಯುಗದ ಕಾಲದ ಅವಶೇಷಗಳನ್ನು ಶೋಧಿಸಲಾಗಿದೆ. ಈ ಶೋಧನೆಗಳಿಂದ ಮಾನವನ ವಿವಿಧ ಸಂಸ್ಕೃತಿಗಳ ಹಂತವನ್ನು ಕಾಣಬಹುದಾಗಿದೆ. ಅವು ಗಳೆಂದರೆ ಹಳೆ ಶಿಲಾಯುಗ ಸಂಸ್ಕೃತಿಯ ಮೂರು ಹಂತಗಳನ್ನು ಕಿಬ್ಬನಹಳ್ಳಿ[1] ಮತ್ತು ಬಿಳಿಗೆರೆ (ತಿಪಟೂರು ತಾಲ್ಲೂಕು) ಗಳಲ್ಲಿಯೂ, ಸೂಕ್ಷ್ಮಶಿಲಾ ಯುಗದ ಅವಶೇಷಗಳನ್ನು ಕಿಬ್ಬನಹಳ್ಳಿ[2], ಮೀನಾಕ್ಷಯ್ಯ ಎಸ್ಟೇಟ್[3] ಮತ್ತು ಹಿರೇಗುಂಡಗಲ್ಲು[4] (ತುಮಕೂರು ತಾಲ್ಲೂಕು) ನಲ್ಲೂ, ನೂತನ ಶಿಲಾಯುಗದ ಆಯುಧಗಳನ್ನು ವೈ.ಎನ್. ಹೊಸಕೋಟೆ[5] (ಪಾವಗಡ ತಾಲ್ಲೂಕು) ಯಲ್ಲಿಯೂ ಬೃಹತ್ ಶಿಲಾಯುಗದ ಅವಶೇಷ ಗಳನ್ನು ಬೆಳ್ಳಿಬಟ್ಟಲು (ತುಮಕೂರು ತಾಲ್ಲೂಕು), ಕ್ಯೇರಳಕಟ್ಟೆ[6] ಮತ್ತು ಜಕ್ಕನಹಳ್ಳಿ[7] (ತಿಪಟೂರು ತಾಲ್ಲೂಕು) ಗಳಲ್ಲಿಯೂ ಕಾಣಬಹುದಾಗಿದೆ.

ಈ ಜಿಲ್ಲೆಯಲ್ಲಿ ನಡೆಸಿದ ಇತ್ತೀಚಿನ ಹಲವು ಸ್ಥಳಗಳ ಸರ್ವೇಕ್ಷಣೆಯಿಂದ ಪ್ರಾಗೈತಿಹಾಸದ ಹೆಚ್ಚು ಮಾಹಿತಿಯನ್ನು ತಿಳಿಯಬಹುದಾಗಿದೆ.

**ಬೆಳ್ಳಿಬಟ್ಟಲಹಳ್ಳಿ:** ಇದು ತುಮಕೂರು ತಾಲ್ಲೂಕು ಊರಡಗೆರೆ ಹೋಬಳಿಯಲ್ಲಿರುವ ಒಂದು ಪುಟ್ಟ ಗ್ರಾಮ. ತುಮಕೂರಿನ ಪೂರ್ವಕ್ಕೆ ಸುಮಾರು 15 ಕಿ.ಮೀ. ದೂರದಲ್ಲಿದೆ. ಇಲ್ಲಿ ಈಗಾಗಲೇ ಬಿ.ಎಲ್. ರೈಸ್‌ರವರು ಬೃಹತ್ ಶಿಲಾಯುಗದ ಗೋರಿಗಳಿರುವುದನ್ನು ತಿಳಿಸಿದ್ದಾರೆ. ಇವುಗಳು ವೃತ್ತಾಕಾರದ ಶಿಲಾಗೋರಿಗಳಾಗಿದ್ದು ಇವುಗಳಲ್ಲೊಂದನ್ನು ಅಗೆದು ತೆಗೆಯಲಾಗಿದ್ದು ಅದರಲ್ಲಿ ಬೃಹತ್ ಶಿಲಾಯುಗದ ಕಾಲದ ಮಡಕೆ ಚೂರುಗಳು ಸಿಕ್ಕಿವೆ ಎಂದು ತಿಳಿಸಿದ್ದಾರೆ.

ಇತ್ತೀಚೆಗೆ ಒಂದು ಶಿಲಾಗೋರಿಯನ್ನು ಅಗೆಯಲಾಗಿದ್ದು ಅಲ್ಲಿ ದೊರೆತ ಕೆಂಪಾದ ಮಡಕೆಯ ಚೂರುಗಳ ಮೇಲೆ ಬಿಳಿಬಣ್ಣದಿಂದ ಗೆರೆ ಮತ್ತು ಚುಕ್ಕಿಗಳನ್ನು ಹಾಕಿರುವುದು ಒಂದು ವೈಶಿಷ್ಟ್ಯ ಪೂರ್ಣವಾಗಿದ್ದು ಬೃಹತ್ ಶಿಲಾಯುಗದ ಕಾಲದಲ್ಲಿಯೂ ಬಣ್ಣವನ್ನು ಉಪಯೋಗಿಸಿ ಮಡಕೆಯ ಹೊರಮೈಯನ್ನು ಚಿತ್ರಿಸಲಾಗುತ್ತಿತ್ತೆಂದು ತಿಳಿಯ ಬಹುದಾಗಿದೆ. ಇಂತಹ ಚಿತ್ರಣಗಳಿಂದ ಕೂಡಿದ ಬೃಹತ್ ಶಿಲಾಯುಗದ ಮಡಕೆ ಚೂರುಗಳು ಭಾರತದ ಕೆಲವೇ ಸ್ಥಳಗಳಲ್ಲಿ ದೊರೆತಿವೆ[8].

ಇದೇ ಸ್ಥಳದಲ್ಲಿ ದೊರೆತ ನೂತನ ಶಿಲಾಯುಗದ ವೃತ್ತಾಕಾರದ ಕಲ್ಲಿನ ಚಕ್ರ (Ring Stone or Mace head) ಮತ್ತು ಕಾಗೆ ಬಂಗಾರ ಮಿಶ್ರಿತ ಮಡಕೆ ಚೂರುಗಳು ಪ್ರಮುಖ ವಾದವು. ಈ ಕಲ್ಲಿನ ಚಕ್ರವನ್ನು ಮರದ ಕೋಲಿಗೆ ಸಿಕ್ಕಿಸಿ ಕೊಂಡು ಮೊನಚಾದ ಭಾಗದಿಂದ ಅಗೆಯುತ್ತಿದ್ದರು. ಈ ಚಕ್ರದಿಂದಾಗಿ ಅಗೆಯಲು ಭಾರವು ದೊರೆತಿದಂತಾ ಗುತ್ತಿತ್ತು. ವಿವಿಧ ರೀತಿಯ ಶಿಲಾ ಕೊಡಲಿಗಳು ದೊರೆತಿದ್ದು ಸಿಕ್ಕಿದ ಎಲ್ಲವೂ ಕೂಡ ಒಂದಲ್ಲೊಂದು ಭಾಗ ತುಂಡಾಗಿದೆ. ಇಲ್ಲಿ ದೊರೆತ ಮಡಕೆ ಚೂರುಗಳು ಮತ್ತು ಆಯುಧಗಳಿಂದಾಗಿ ಈ ಸ್ಥಳವು ನೂತನ ಶಿಲಾಯುಗದ ಜನರ ನಿವಾಸ ಸ್ಥಾನವಾಗಿತ್ತೆಂದು ತಿಳಿಯಬಹುದಾಗಿದೆ.

**ರಾಚಮಾರನಹಳ್ಳಿ:** ರಾಚಮಾರನ ಹಳ್ಳಿಯು ಪಾವಗಡ ತಾಲ್ಲೂಕಿನ ವೈ.ಎನ್. ಹೊಸಕೋಟೆ ಹೋಬಳಿಯಲ್ಲಿರುವ ಒಂದು ಬೇಚಿರಾಕ್ ಗ್ರಾಮ. ಚಾರಿತ್ರಿಕ ಯುಗದ ಆರಂಭದ ಮಡಕೆ ಚೂರುಗಳು

ದೊರೆತಿವೆ. ಈ ಮಡಕೆ ಚೂರುಗಳ ಮೇಲೆ ಬಿಳಿ ಕಂದು ಮತ್ತು ನಸುಗೆಂಪು ಬಣ್ಣಗಳನ್ನು ಉಪಯೋಗಿಸಿ ಹಲವಾರು ರೀತಿಯ ಚಿತ್ರಗಳನ್ನು ಬಿಡಿಸಲಾಗಿದೆ. ಸರಳ ರೇಖೆ ಮತ್ತು ವಕ್ರ ರೇಖೆಗಳನ್ನು ಎಳೆದು ಮಾಡಲಾಗಿದೆ. ಸರಳ ರೇಖೆಗೆ ಚುಕ್ಕಿಗಳನ್ನಿಟ್ಟಿರುವುದು, ಚೌಕಾಕಾರವಾಗಿ ಮಾಡಲು ಎಳೆದಂತಹ ಗೆರೆಗಳು, ಒಂದು ಸಾಲು ಸರಳ ರೇಖೆ ಮತ್ತೊಂದು ಸಾಲು ಚುಕ್ಕಿಗಳನ್ನಿಟ್ಟಿರುವುದು ಒಂದು ರೀತಿಯ ಚಿತ್ರಗಳಾದರೆ ಇವುಗಳೆಲ್ಲ ವಕ್ಕಿಂತಲೂ ಅಪರೂಪವಾದುದೆಂದರೆ "ಚೇಳಿನಾಕೃತಿ"(?)ಯ ಚಿತ್ರವನ್ನು ಬಿಡಿಸಿರುವುದು. ಒಟ್ಟಿನಲ್ಲಿ ಇದು ಚಾರಿತ್ರಿಕ ಯುಗದಲ್ಲಿ ಬಹು ಪ್ರಸಿದ್ಧಿಪಡೆದ ಸ್ಥಳವಾಗಿತ್ತೆಂದು ತಿಳಿಯಬಹುದು. ಬೃಹತ್ ಶಿಲಾಯುಗದ ಕಪ್ಪು-ಕೆಂಪು ಮಡಕೆ ಚೂರುಗಳು ದೊರೆತಿವೆ. ನೂತನ ಶಿಲಾಯುಗದ ಮಡಕೆ ಚೂರುಗಳು ಮತ್ತು ಆಯುಧಗಳೂ ಕೂಡ ಇಲ್ಲಿ ದೊರೆತಿದ್ದು ಮಡಕೆಗಳನ್ನು ಕಾಗೆಬಂಗಾರದ ಮಿಶ್ರಣದಲ್ಲಿ ಮಾಡಲಾಗಿದೆ.

ನಾಗಲಾಪುರ: ನಾಗಲಾಪುರವು[9] ಈಗಾಗಲೇ ಕರ್ನಾಟಕದ ಪ್ರಾಗೈತಿಹಾಸಿಕ ಭೂಪಟದಲ್ಲಿ ಹೆಸರು ಮಾಡಿರುವ ಗ್ರಾಮ. ಕಾರಣ ತಿರುಪತಿಯ ಶ್ರೀ ವೆಂಕಟೇಶ್ವರ ವಿಶ್ವವಿದ್ಯಾಲಯದ ಡಾ॥ ರಾಮಿರೆಡ್ಡಿ ಇಲ್ಲಿ ಬೂದಿಗುಡ್ಡೆ (Ash Mound) ಇರುವುದನ್ನು ಗುರುತಿಸಿರುವುದು. ನಾಗಲಾಪುರವು ತುಮಕೂರು ಜಿಲ್ಲೆ, ಪಾವಗಡ ತಾಲ್ಲೂಕು, ವೈ.ಎನ್. ಹೊಸಕೋಟೆ ಹೋಬಳಿಯಲ್ಲಿರುವ ಒಂದು ಗ್ರಾಮ. ಇದು ಪಾವಗಡ-ಕಲ್ಯಾಣದುರ್ಗ ರಸ್ತೆಯಲ್ಲಿ ಪಾವಗಡದಿಂದ ಸುಮಾರು 17 ಕಿ.ಮೀ. ದೂರದಲ್ಲಿದೆ. ಮುಖ್ಯರಸ್ತೆಯಿಂದ 2ಕಿ.ಮೀ. ಪೂರ್ವಕ್ಕೆ ಗ್ರಾಮವಿದ್ದು ಗ್ರಾಮಕ್ಕೆ ಮುಂಚೆ ಶ್ರೀ ಗುಪ್ತ ಅವರ ಹೊಲದಲ್ಲಿ ಈ ಬೂದಿಗುಡ್ಡೆಯನ್ನು ಕಾಣಬಹುದಾಗಿದೆ. ಇದೇ ಸ್ಥಳದಲ್ಲಿ ಒಂದು ಗುಡ್ಡವಿದ್ದು ಇದರ ತಪ್ಪಲಿನಲ್ಲಿ ಹಲವು ಪ್ರಾಗೈತಿಹಾಸಿಕ ಅವಶೇಷಗಳನ್ನು ಕಾನಬಹುದಾಗಿದೆ.

ಇಲ್ಲಿ ಅತ್ಯಂತ ಹಳೆಯ ಶಿಲಾಯುಗದ ಆಯುಧವೊಂದು ದೊರೆತಿದೆ. ಇದನ್ನು ವಿಶ್ಲೇಷಿ ಸುವಲ್ಲಿ ಈ ಆಯುಧವು ಸಾಮಾನ್ಯ ಚಕ್ಕೆ ಕಲ್ಲಿನ ಆಯುಧವಾಗಿದ್ದು, ಎರಡೂ ಕಡೆ ಹರಿತವಾದ ಅಲಗುಗಳನ್ನು ಹೊಂದಿದೆ. ಮದ್ಯದ ಭಾಗ ಉಬ್ಬಾಗಿದೆ.

ಇಲ್ಲಿ ಸೂಕ್ಷ್ಮ ಶಿಲಾಯುಗದ ಕೆಲವು ಆಯುಧಗಳು ದೊರೆತಿವೆ. ಇವು ಚಕ್ಕೆ ತೆಗೆದು ಮಾಡಲಾದ ಆಯುಧಗಳಾಗಿವೆ. ಒಂದು ಬದಿ ಮೊಂಡಾದ ತೆಳುವಾದ ಚಕ್ಕೆಗಳು, ಎರಡೂ ಬದಿಯೂ ಹರಿತವುಳ್ಳ ತೆಳುವಾದ ಚಕ್ಕೆ ಮತ್ತು ಮೊನೆಗಳುಳ್ಳ ಆಯುಧಗಳು ದೊರೆತಿವೆ. ಈ ಆಯುಧಗಳೆಲ್ಲವೂ ಬೆಣಚುಕಲ್ಲಿನವು.

ಇದರ ಜೊತೆಗೆ ನೂತನ ಶಿಲಾಯುಗಕ್ಕೆ ಸೇರಿದ ಕೆಲವು ಶಿಲಾಕೊಡಲಿಗಳು ಮತ್ತು ಮಡಕೆಚೂರುಗಳನ್ನು ಕಾಣಬಹುದಾಗಿದೆ. ಇವು ತೀಡಿ ನಯಮಾಡಿದ ಶಿಲಾಯುಧಗಳು ಇಲ್ಲಿ ದೊರೆತ ಎಲ್ಲಾ ಶಿಲಾಯುಧಗಳು ಒಂದಲ್ಲೊಂದು ಭಾಗ ಮುರಿದು ಹೋಗಿದೆ. ಇವುಗಳಲ್ಲಿ ಎರಡು ಆಯುಧಗಳ ಮೊನಚಾದ ಭಾಗ ವಿದ್ದು ಕೆಳಗಿನ ಅಲಗು ಅಗಲ ಆಕಾರದಲ್ಲಿದೆ. ಇನ್ನೆರಡು ಆಯುಧಗಳ ಮಧ್ಯ ಭಾಗದವುಗಳಾಗಿದ್ದು ಈ ಎರಡನ್ನು ತೀಡಿ ನಯ ಮಾಡಿರುವುದನ್ನು ಕಾಣಬಹುದು. ಉಳಿದೆರಡು ಆಯುಧಗಳ ಮೇಲ್ಭಾಗವಾಗಿದ್ದು ಬಟ್ಟತಲೆಯನ್ನು ಹೊಂದಿವೆ. ಒಟ್ಟಿನಲ್ಲಿ ಇಲ್ಲಿ ದೊರೆತ ಬೂದಿಗುಡ್ಡೆ, ನಯವಾದ ಶಿಲಾಯುಧಗಳು ಮತ್ತು ಮಡಕೆಚೂರುಗಳಿಂದಾಗಿ ನೂತನ ಶಿಲಾಯುಗದ ಸಂಸ್ಕೃತಿಯ ನೆಲೆಯಾಗಿತ್ತೆಂದು ತಿಳಿಯಬಹುದಾಗಿದೆ.

**ಯಲ್ಲಪ್ಪನಾಯಕನಹಳ್ಳಿ:** ಇದು ಪಾವಗಡ ತಾಲ್ಲೂಕು ವೈ.ಎನ್. ಹೊಸಕೋಟೆ ಹೋಬಳಿಯಲ್ಲಿರುವ ಒಂದು ಪುಟ್ಟ ಗ್ರಾಮ. ಇದು ಹೋಬಳೀ ಕೇಂದ್ರದಿಂದ ಪಶ್ಚಿಮಕ್ಕೆ 2 ಕಿ.ಮೀ. ದೂರದಲ್ಲಿದೆ. ಈ ಗ್ರಾಮದ ಹತ್ತಿರವಿರುವ ಗುಡ್ಡದ ಬಳಿಯಲ್ಲಿ ಹಲವಾರು ಪ್ರಾಗೈತಿಹಾಸಿಕ ಅವಶೇಷಗಳನ್ನು ಕಾಣಬಹುದು.

ಇಲ್ಲಿ ದೊರೆತ ಒಂದು ಪ್ರಮುಖ ಅವಶೇಷವೆಂದರೆ ಬೂದಿದಿಬ್ಬ. ಇದು ನೂತನ ಶಿಲಾಯುಗದ್ದಾಗಿದ್ದು, ಆ ಕಾಲದ ಜನರು ದನದ ಸಗಣಿಯನ್ನು ಒಟ್ಟುಮಾಡಿ ಸುಡುವುದು ಪದ್ಧತಿ ಯಾಗಿದ್ದಿತು. ಇಂತಹುದೇ ಒಂದು ಬೂದಿಗುಡ್ಡೆಯು ವೈ.ಎನ್. ಹೊಸಕೋಟೆಯಲ್ಲಿಯೂ ದೊರೆತಿದ್ದು, ಈ ಎರಡೂ ಬೂದಿಗುಡ್ಡೆಗಳೂ ಹೊಸದಾಗಿ ದೊರೆತ ಪ್ರಾಗೈತಿಹಾಸಿಕ ಅವಶೇಷಗಳಾಗಿವೆ. ದುರದೃಷ್ಟ ವಶಾತ್ ಈ ಎರಡೂ ಬೂದಿಗುಡ್ಡೆಗಳನ್ನು ನಲುಗಿಸಲಾಗಿದೆ. ಇದೇ ರೀತಿಯ ಎರಡು ಬೂದಿ ಗುಡ್ಡೆಗಳು ಇದೇ ತಾಲ್ಲೂಕಿನ ನಾಗಲಾಪುರ ಮತ್ತು ಕೊಲಮಿಪಾಳ್ಯಗಳಲ್ಲಿ ಇದ್ದುದನ್ನು ಡಾ. ರಾಮಿರೆಡ್ಡಿಯವರು ತಿಳಿಸಿರುವರು[10].

ಇಲ್ಲಿ ನಯಮಾಡಿದ ಶಿಲಾಯುಧಗಳು ದೊರೆತಿದ್ದು ಒಂದು ಚಾಣದ ಆಕೃತಿಯಲ್ಲಿರುವುದು ವೈಶಿಷ್ಟಪೂರ್ಣವಾದುದು. ಎರಡು ಪೂರ್ಣ ಪ್ರಮಾಣದ ಕೊಡಲಿಗಳಾಗಿದ್ದು ಕೆಳಗಿನ ಅಲಗು ಮೊನಚಾಗಿ ಅಗಲ ಆಕಾರದಲ್ಲಿದೆ. ಉಳಿದವು ಆಯುಧದ ಒಂದಲ್ಲೊಂದು ಭಾಗಗಳಾಗಿವೆ.

ಇದೇ ಸ್ಥಳದಲ್ಲಿ ಬೃಹತ್ ಶಿಲಾಯುಗದ ಹೊಳಪುಳ್ಳ ಕೆಂಪು, ಕಪ್ಪು, ಕೆಂಪು ಮತ್ತು ಕಪ್ಪು ಬಣ್ಣದ ಮಡಕೆಯ ಚೂರುಗಳು ದೊರೆತಿವೆ. ಇದರಿಂದಾಗಿ ಈ ಸ್ಥಳವು ಬೃಹತ್ ಶಿಲಾಯುಗದ ಮಾನವನ ನಿವಾಸ ಸ್ಥಾನವಾಗಿರಬೇಕೆಂದು ತಿಳಿಯ ಬಹುದಾಗಿದೆ.

ಇದೇ ಪ್ರದೇಶದಲ್ಲಿ ಚಾರಿತ್ರಿಕಯುಗದ ಆರಂಭದ ಕಾಲದ ಮಡಕೆ ಚೂರುಗಳು ದೊರೆತಿವೆ. ಈ ಮಡಕೆ ಚೂರುಗಳು ವಿಶಿಷ್ಟವಾದವುಗಳು. ಇಂತಹದೇ ಮಡಕೆ ಚೂರುಗಳು ಬ್ರಹ್ಮಗಿರಿ ಮತ್ತು ಚಂದ್ರವಳ್ಳಿಗಳಲ್ಲಿ ದೊರೆತಿದ್ದು ಇಂತಹ ಮಡಕೆಗಳುಳ್ಳ ಸಂಸ್ಕೃತಿಯನ್ನು ಮಾರ್ಟಿಮರ್ ವೀಲ್ಹರ್‌ರವರು "ಆಂಧ್ರ ಸಂಸ್ಕೃತಿ"[1] ಎಂದು ಕರೆಯುವರು. ಇತ್ತೀಚೆಗೆ ಈ ಸಂಸ್ಕೃತಿಯನ್ನು ಆದಿಚಾರಿತ್ರಿಕ ಕಾಲದ ಸಂಸ್ಕೃತಿ ಎಂದು ಕರೆಯಲಾಗುತ್ತದೆ.

ಒಟ್ಟಿನಲ್ಲಿ ಈ ಸ್ಥಳವು ಪ್ರಾಗೈತಿಹಾಸದ ಮಾನವನಿಗೆ ಮತ್ತು ಆದಿಚರಿತ್ರೆಯ ಜನರಿಗೆ ಪ್ರಾಶಸ್ತ್ಯವಾದ ಸ್ಥಳವಾಗಿತ್ತೆಂಬುದು ತಿಳಿಯುತ್ತದೆ.

ಮರಿದಾಸನಹಳ್ಳಿ: ಇದು ಪಾವಗಡ ತಾಲ್ಲೂಕಿನ ವೈ.ಎನ್. ಹೊಸಕೋಟೆ ಹೋಬಳಿಯಲ್ಲಿರುವ ಒಂದು ಗ್ರಾಮ. ಇದು ಪಾವಗಡದಿಂದ ಸುಮಾರು 18 ಕಿ.ಮೀ. ದೂರದಲ್ಲಿದೆ. ಇಲ್ಲಿ ಚಾರಿತ್ರಿಕಯುಗದ, ಬೃಹತ್ ಶಿಲಾಯುಗದ ಮತ್ತು ಕೈನಲ್ಲಿ ಮಾಡಿದ ನೂತನ ಶಿಲಾಯುಗದ ಮಡಕೆ ಚೂರುಗಳು ದೊರೆತಿವೆ.

ನೂತನಶಿಲಾಯುಗದ ಕೊಡಲಿಗಳು ಮತ್ತು ಕೈನಲ್ಲಿ ಮಾಡಿದ ಮಡಕೆ ಚೂರುಗಳು ದೊರೆತಿವೆ. ಬೃಹತ್ ಶಿಲಾಯುಗದ ಕಪ್ಪು, ಕೆಂಪು ಮತ್ತು ಕಪ್ಪು –ಕೆಂಪು ಬಣ್ಣದ ಹೊಳಪುಳ್ಳ ಮಡಕೆ ಚೂರುಗಳು ದೊರೆತಿವೆ. ಚಾರಿತ್ರಿಕ ಯುಗದ ಹೊಳಪುಳ್ಳ ಕೆಂಪು ಬಣ್ಣದ ಮಡಕೆ ಚೂರುಗಳು ದೊರೆತಿವೆ.

ಹೀಗೆ ತುಮಕೂರು ಜಿಲ್ಲೆಯು ಪ್ರಾಗೈತಿಹಾಸಿಕವಾಗಿ ಸಂಪದ್ಭರಿತವಾಗಿದ್ದು ಹುಡುಕಿದಕಷ್ಟೂ ಅವಶೇಷಗಳು ಸಿಗುತ್ತಿದ್ದು, ಒಟ್ಟಿನಲ್ಲಿ ಇದು ಒಂದು ಪ್ರಾಗೈತಿಹಾಸದ ಆಗರವೆಂದರೆ ತಪ್ಪಾಗಲಾರದು.

---

## ಅಡಿ ಟಿಪ್ಪಣಿಗಳು

1) ಶೇಷಾದ್ರಿ.ಎಂ., 'ದಿ ಸ್ಟೋನ್‌ಯೂಸಿಂಗ್ ಕಲ್ಚರ್ ಆಫ್ ಪ್ರಿ ಹಿಸ್ಟಾರಿಕ್ ಅಂಡ್ ಪ್ರೋಟೋ ಹಿಸ್ಟಾರಿಕ್ ಮೈಸೂರ್' (1956–ಲಂಡನ್)

2) ಶೇಷಾದ್ರಿ, ಎಂ. "ಮೈಕ್ರೋಲಿಥಿಕ್ ಇಂಡಸ್ಟ್ರಿ ಆಫ್ ಕಿಬ್ಬನಹಳ್ಳಿ, ಮೈಸೂರ್ ಸ್ಟೇಟ್", 'ಕರೆಂಟ್ ಸೈನ್ಸ್' ಅಕ್ಟೋಬರ್; 1954, ಸಂಪುಟ–23 ಪುಟ 326-7.

3) ಫೂಟ್.ಆರ್.ಬಿ. – 'ದಿ ಫ್ಲೂಟ್ ಕಲೆಕ್ಷನ್ಸ್ ಆಫ್ ಇಂಡಿಯನ್ ಪ್ರಿ ಹಿಸ್ಟಾರಿಕ್ ಅಂಡ್ ಪ್ರೋಟೋ ಹಿಸ್ಟಾರಿಕ್ ಅಂಟಿಕ್ವಿಟಿಸ್, ನೋಟ್ಸ್ ಆನ್ ದೇರ್ ಏಜಸ್ ಅಂಡ್ ಡಿಸ್ಟ್ರಿಬ್ಯೂಶನ್' (1916–ಮದ್ರಾಸ್)

4) 'ಪ್ರಜಾವಾಣಿ' ಕನ್ನಡ ದಿನಪತ್ರಿಕೆ ದಿನಾಂಕ ಜೂನ್ 1, 1988 ಮತ್ತು ಕನ್ನಡ ಪ್ರಭ ದಿನಪತ್ರಿಕೆ ದಿನಾಂಕ 30ನೇ ಮೇ ಮತ್ತು 16ನೇ ಜುಲೈ 1988ರಲ್ಲಿ ವರದಿ ಪ್ರಕಟಗೊಂಡಿತ್ತು.

5) ಶ್ರೀವತ್ಸ ಎಸ್.ವಟಿ. – 'ಕನ್ನಡಪ್ರಭ' ದಿನಪತ್ರಿಕೆಯ ವಾರದ ವಿಭಾಗ ದಿನಾಂಕ 27ನೇ ಮೇ 1979ರಲ್ಲಿ ಪ್ರಕಟಗೊಂಡ ಲೇಖನ.

6) ಮೈಸೂರು ಜಿಯಲಾಜಿಕಲ್ ಡಿಪಾರ್ಟ್‌ಮೆಂಟ್ ರೆಕಾರ್ಡ್ಸ್ VIII ಪುಟ 72
7) 'ಪ್ರಜಾವಾಣಿ' ಕನ್ನಡ ದಿನಪತ್ರಿಕೆ ದಿನಾಂಕ 23ನೇ ಜೂನ್ 1982 ಮತ್ತು 'ಕನ್ನಡಪ್ರಭ' ದಿನ ಪತ್ರಿಕೆ 5ನೇ ಜೂನ್ 1982ರಲ್ಲಿ ವರದಿ ಪ್ರಕಟಗೊಂಡಿತ್ತು.
8) ಗುರುಮೂರ್ತಿ ಎಸ್. 'ಸಿರಾಮಿಕ್ ಟ್ರೆಡಿಶನ್ಸ್ ಇನ್ ಸೌತ್ ಇಂಡಿಯಾ, ಪುಟ 193, 196 ಮತ್ತು 242 (1981 -ಮದ್ರಾಸ್)
9) ರಾಮಿರೆಡ್ಡಿ ವಿ. 'ಆಶ್ ಮೌಂಡ್ಸ್ ಇನ್ ಸೌತ್ ಇಂಡಿಯ: ಎ ರಿವ್ಯೂ', 'ಆರ್ಕಿಯಾಲಜಿ ಇನ್ ಕರ್ನಾಟಕ' ಸುಂದರ.ಎ. (1990 ಮೈಸೂರು)
10) ಮೇಲಿನಂತೆಯೇ
11) ವ್ಹೀಲರ್, ಆರ್.ಇ.ಎಂ. - 'ಏನ್ಶಿಯಂಟ್ ಇಂಡಿಯಾ ಸಂಪುಟ' - 4 ಪುಟ 187 ಮತ್ತು 271 (1947 ನ್ಯೂಡೆಲ್ಲಿ)